

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 537 (692) |
| ಸದಸ್ಯರ ಹೆಸರು | : | ಶ್ರೀ ಕೆ.ಟಿ ಶ್ರೀಕಂಠೇಗೌಡ (ಪದವೀಧರರ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | : | 10-03-2020 |
| ಉತ್ತರಿಸುವ ಸಚಿವರು | : | ಮಾನ್ಯ ಪೌರಾಡಳಿತ ಹಾಗೂ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು. |

<table>
<tr><th>ಕ್ರ. ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಮಂಡ್ಯ ನಗರಸಭೆ ವ್ಯಾಪ್ತಿಯಲ್ಲಿ ಬರುವ ವಾರ್ಡ್‌ಗಳಲ್ಲಿ ತ್ಯಾಜ್ಯ ವಿಲೇವಾರಿ ಸಮರ್ಪಕವಾಗಿ ನಡೆಯದೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?</td><td>
<ul>
<li>ಮಂಡ್ಯ ನಗರಸಭೆ ವ್ಯಾಪ್ತಿಯಲ್ಲಿ ಪ್ರತಿ ನಿತ್ಯ 60 ಟನ್ ತ್ಯಾಜ್ಯ ಉತ್ಪತ್ತಿಯಾಗುತ್ತಿದ್ದು, ಅಂದಾಜು 56 ಟನ್ ತ್ಯಾಜ್ಯವನ್ನು ಸಂಗ್ರಹಿಸಿ ಕಾಳೇನಹಳ್ಳಿ ಸಂಸ್ಕರಣಾ ಘಟಕದಲ್ಲಿ ವಿಲೇ ಮಾಡಲಾಗುತ್ತಿದೆ. 2ಟನ್ ಹಸಿ ತ್ಯಾಜ್ಯವನ್ನು ಮೇಲುಕೋಟೆ ರಸ್ತೆಯ ಬಳಯಿರುವ ವಿಕೇಂದ್ರಿಕೃತ ತ್ಯಾಜ್ಯ ಸಂಸ್ಕರಣಾ ಘಟಕದಲ್ಲಿ ಸಂಸ್ಕರಿಸಿ ಪಾರ್ಕ್‌ಗಳಲ್ಲಿ ಗೊಬ್ಬರವನ್ನಾಗಿ ಬಳಸಲಾಗುತ್ತಿದೆ.</li>
<li>ಪ್ರಸ್ತುತ ತ್ಯಾಜ್ಯ ಸಂಸ್ಕರಣಾ ಘಟಕದಲ್ಲಿ ತ್ಯಾಜ್ಯ ಸಂಸ್ಕರಣಾ ಸಾಮರ್ಥ್ಯ ಕಡಿಮೆಯಿದ್ದು, ಯಂತ್ರೋಪಕರಣಗಳು ಹಾಗು ಮಾನವಸಂಪನ್ಮೂಲದ ಕೊರತೆಯಿರುತ್ತದೆ.</li>
<li>ಆದ್ದರಿಂದ ತ್ಯಾಜ್ಯ ಸಂಸ್ಕರಣೆಯನ್ನು ಪರಿಣಾಮಕಾರಿಯಾಗಿ ಕೈಗೊಳ್ಳಲು ಅಗತ್ಯವಿರುವ ಸಿವಿಲ್ ಕಾಮಗಾರಿ ಹಾಗು ಯಂತ್ರೋಪಕರಣಗಳನ್ನು ಪ್ರಸ್ತಾಪಿಸಿ ಸ್ವಚ್ಚ ಭಾರತ ಮಿಷನ್ ಅಡಿ ವಿಸ್ತೃತ ಯೋಜನಾ ವರದಿಯನ್ನು ಸಿದ್ದಪಡಿಸಿದ್ದು ಅದರ ರೀತ್ಯಾ 16 ಸಿವಿಲ್ ಕಾಮಗಾರಿ ಹಾಗು 11 ಯಂತ್ರೋಪಕರಣಗಳ ಖರೀದಿಯ ಟೆಂಡರ್ ಪ್ರಕ್ರಿಯೆ ಜಾರಿಯಲ್ಲಿರುತ್ತದೆ.</li>
</ul>
</td></tr>
<tr><td>ಆ)</td><td>ತ್ಯಾಜ್ಯ ವಿಲೇವಾರಿ ನಿರ್ವಹಣೆಗಾಗಿ ಅನುಮೋದನೆಗೊಂಡ ಹುದ್ದೆಗಳೆಷ್ಟು; ಇದರಲ್ಲಿ ಖಾಲಿ ಹುದ್ದೆಗಳೆಷ್ಟು;</td><td>
<ul>
<li>ಘನತ್ಯಾಜ್ಯ ನಿರ್ವಹಣೆಗೆ ಅಗತ್ಯವಿರುವ ಹುದ್ದೆಯ ವಿವರ ಈ ಕೆಳಕಂಡಂತಿದೆ.</li>
</ul>
<table>
<tr><th>ಕ.ಸಂ</th><th>ಹುದ್ದೆಗಳು</th><th>ಅನುಮೋದನೆಗೊಂಡಿರುವ ಹುದ್ದೆ</th><th>ಖಾಲಿ</th></tr>
<tr><td>1</td><td>ಪೌರಕಾರ್ಮಿಕರು</td><td>204</td><td>5</td></tr>
<tr><td>2</td><td>ವಾಹನ ಚಾಲಕರು</td><td>38</td><td>8</td></tr>
<tr><td>3</td><td>ಸೆಕ್ಯೂರಿಟಿ ಮತ್ತು ಸೂಪರ್ ವೈಜರ್</td><td>11</td><td>11</td></tr>
</table>
</td></tr>
<tr><td>ಇ)</td><td>ಖಾಲಿ ಹುದ್ದೆಗಳನ್ನು ಯಾವಾಗ ಭರ್ತಿ ಮಾಡಲಾಗುವುದು;</td><td>
<ul>
<li>ವಯೋನಿವೃತ್ತಿ ಮತ್ತು ನಿಧನದಿಂದ ತೆರವಾಗಿರುವ 5 ಜನ ಪೌರಕಾರ್ಮಿಕರ ಹುದ್ದೆಯನ್ನು ಜಿಲ್ಲಾಧಿಕಾರಿಗಳ ಹಂತದಲ್ಲಿ ಭರ್ತಿಮಾಡಲು ಕ್ರಮವಹಿಸಲಾಗಿದೆ.</li>
<li>8 ವಾಹನ ಚಾಲಕರು ಹಾಗು 11 ಜನ ಸೆಕ್ಯೂರಿಟಿ ಮತ್ತು ಸೂಪರ್ ವೈಜರ್‌ಗಳನ್ನು ಹೊರಗುತ್ತಿಗೆ ಮೂಲಕ ಪಡೆಯುವ ಟೆಂಡರ್</li>
</ul>
</td></tr>
</table>

| | | |
|---|---|---|
| | | ಪ್ರಕ್ರಿಯೆ ಪ್ರಗತಿಯಲ್ಲಿದ್ದು, ಎರಡು ತಿಂಗಳ ಅವಧಿಯ ಒಳಗೆ ಇದನ್ನು ಪೂರ್ಣಗೊಳಿಸಲು ಕ್ರಮವಹಿಸಲಾಗುವುದು. |
| ಇ) | ಒಣ ಮತ್ತು ದ್ರವ ತ್ಯಾಜ್ಯಗಳ ವೈಜ್ಞಾನಿಕ ವಿಲೇವಾರಿಗೆ ಸರ್ಕಾರ ಕೈಗೊಂಡ ಕ್ರಮಗಳೇನು? | • ಘನತ್ಯಾಜ್ಯ ನಿರ್ವಹಣೆ ನಿಯಮಗಳು 2016 ರ ರೀತ್ಯಾ ಹಸಿ ಹಾಗು ಒಣ ತ್ಯಾಜ್ಯವನ್ನು ಮೂಲದಲ್ಲಿಯೇ ಬೇರ್ಪಡಿಸಿ ಪ್ರತ್ಯೇಕವಾಗಿ 18 ವಾರ್ಡ್‌ಗಳಿಂದ ಸಂಗ್ರಹಿಸಲು ಕ್ರಮವಹಿಸಿದೆ.<br>• ನಗರಸಭೆಯು ಸಂಗ್ರಹಿಸುವ ಒಣ ತ್ಯಾಜ್ಯ ವಸ್ತುಗಳನ್ನು ಪುನ: ಮರುಬಳಕೆಯಾಗುವ, ಮರುಬಳಕೆಯಾಗದ ಹಾಗು ದಹನಯೋಗ್ಯ ತ್ಯಾಜ್ಯಗಳಾಗಿ ವಿಂಗಡಿಸಲಾಗುತ್ತಿದೆ.<br>• ಮರುಬಳಕೆಯಾಗುವ ತ್ಯಾಜ್ಯವನ್ನು ಅಧಿಕೃತ ಮರುಬಳಕೆ ಕೇಂದ್ರಕ್ಕೆ (Authorised recyclers) ಸಾಗಣೆ ಮಾಡಲು ನಗರಸಭೆಗೆ ಸೂಚನೆ ನೀಡಿದೆ.<br>• ಮರುಬಳಕೆಯಾಗದ ಮತ್ತು ದಹನಯೋಗ್ಯ ತ್ಯಾಜ್ಯವನ್ನು ಪ್ರತ್ಯೇಕಿಸಿ ಹತ್ತಿರದ ಕಾರ್ಖಾನೆಗಳಿಗೆ ಪರ್ಯಾಯ ಇಂಧನವಾಗಿ ಬಳಸುವಂತೆ ಕ್ರಮವಹಿಸುವುದು ಹಾಗು ನಿಸತ್ವ ತ್ಯಾಜ್ಯವನ್ನು ಮಾತ್ರ ವೈಜ್ಞಾನಿಕ ನೆಲಭರ್ತಿ ಮಾಡಲು ಸೂಚನೆಗಳನ್ನು ನೀಡಲಾಗಿದೆ.<br><br>ದ್ರವ ತ್ಯಾಜ್ಯಗಳ ವೈಜ್ಞಾನಿಕ ವಿಲೇವಾರಿಗಾಗಿ ಮಂಡ್ಯ ನಗರಸಭೆಯು ಈ ಕೆಳಕಂಡಂತೆ ಕ್ರಮವಹಿಸಿದೆ.<br>• ಮಂಡ್ಯ ನಗರಸಭಾ ವ್ಯಾಪ್ತಿಯಲ್ಲಿ ಸುಮಾರು 225 ಕಿ.ಮೀಗಳ ಒಳಚರಂಡಿ ಕೊಳವೆಗಳನ್ನು ಅಳವಡಿಸಲಾಗಿದೆ. (ನಗರದ ಶೇ.98 ಭಾಗದಲ್ಲಿ ಅಳವಡಿಸಲಾಗಿದೆ.) ಮಂಡ್ಯ ನಗರದಲ್ಲಿ ಒಳಚರಂಡಿ ವ್ಯವಸ್ಥೆಯನ್ನು ಉನ್ನತೀಕರಿಸಲು ರೂ.6150.00 ಲಕ್ಷಗಳ ಅಂದಾಜು ಪಟ್ಟಿಗೆ ಅನುಮೋದನೆ ನೀಡುವ ಪ್ರಸ್ತಾವನೆಯು ಸರ್ಕಾರದ ಪರಿಶೀಲನೆಯಲ್ಲಿರುತ್ತದೆ.<br>• ಮಂಡ್ಯ ನಗರದಲ್ಲಿ ಉತ್ಪತ್ತಿಯಾಗುವ ಮಲಿನ ನೀರಿನ ಶುದ್ಧೀಕರಣಕ್ಕಾಗಿ ಮಂಡ್ಯ ನಗರದ ಚಿಕ್ಕೆಗೌಡನ ದೊಡ್ಡಿ ಪ್ರದೇಶದಲ್ಲಿ 9.62 ಎಂ.ಎಲ್.ಡಿ ಮತ್ತು ಗುತ್ತಲು ಪ್ರದೇಶದಲ್ಲಿ 8.90 ಎಂ.ಎಲ್.ಡಿ ಮಲಿನ ನೀರು ಶುದ್ಧೀಕರಣ ಘಟಕವನ್ನು ನಿರ್ಮಿಸಿದ್ದು ಶುದ್ಧೀಕರಣ ಕಾರ್ಯ ನಿರ್ವಹಿಸಲಾಗುತ್ತಿದೆ.<br>• ಮಂಡ್ಯ ನಗರದ 4 ಪ್ರದೇಶಗಳಲ್ಲಿ ತೇವ ಭಾವಿ ನಿರ್ಮಿಸಲು ಕ್ರಮ ವಹಿಸಿ ಈಗಾಗಲೇ 3 ತೇವ ಭಾವಿಗಳನ್ನು (ಗುತ್ತಲು, ದೇವೇಗೌಡನ ದೊಡ್ಡಿ ಮತ್ತು ಚಿಕ್ಕೆಗೌಡನ ದೊಡ್ಡಿ) ಚಾಲನೆ ನೀಡಲಾಗಿದೆ ಮತ್ತು ಉಳಿದ ಇನ್ನೊಂದು ತೇವ ಭಾವಿ (ಮಾರುತಿ ನಗರ) ಶೀಘ್ರದಲ್ಲಿಯೇ ಚಾಲನೆಗೊಳಿಸಲು ಕ್ರಮವಹಿಸಲಾಗಿದೆ. |

ಸಂಖ್ಯೆ: ನಅಇ 80 ಸಿಎಸ್‌ಎಸ್ 2020

(ನಾರಾಯಣ ಗೌಡ)
ಪೌರಾಡಳಿತ ಹಾಗೂ
ತೋಟಗಾರಿಕೆ ಮತ್ತು ರೇಷ್ಮೆ ಸಚಿವರು.